ಡಾ॥ ಎ. ವಿ. ನರಸಿಂಹಮೂರ್ತಿ

# ಕರ್ನಾಟಕದಲ್ಲಿ ಇತಿಹಾಸ ಆರಂಭಕಾಲದ ಕೆಲವು ಸಮಸ್ಯೆಗಳು

ಪುರಾತತ್ವ ಆಧಾರದ ಮೇಲೆ ಹೇಳುವುದಾದರೆ ಕರ್ನಾಟಕದಲ್ಲಿ, ಭಾರತದ ಇತರ ಭಾಗಗಳಲ್ಲಿರುವಂತೆ, ಇತಿಹಾಸ ಆರಂಭ ಕಾಲದ ಸಂಸ್ಕೃತಿಯು ಬೆಳಕಿಗೆ ಬಂದಿದೆ. ಅಂದರೆ ಇತಿಹಾಸಪೂರ್ವ ಕಾಲದ ಅನಂತರ, ಆದರೆ ಇತಿಹಾಸಕ್ಕೆ ಖಚಿತವಾಗಿ ಸೇರಬಹುದಾದ ಕಾಲಕ್ಕೆ ಮುಂಚಿನ ಈ ಸಂಸ್ಕೃತಿಯನ್ನೇ ಇತಿಹಾಸ ಆರಂಭಕಾಲದ ಸಂಸ್ಕೃತಿ ಎಂದು ಕರೆಯಬಹುದು. ಉತ್ಖನನಗಳಲ್ಲಿ ದೊರಕಿರುವ ಆಧಾರದ ಮೇಲೆ ಇದರಲ್ಲಿ ಮುಖ್ಯವಾಗಿ ಕೆಲವು ಲಕ್ಷಣಗಳು ಕಾಣಬರುತ್ತವೆ. ಅವುಗಳಲ್ಲಿ ಅತಿ ಮುಖ್ಯವಾದುದು ಆ ಕಾಲದ ಮಡಕೆ. ಸುಟ್ಟ ಕೆಂಪು ಅಥವಾ ಕಂದು ಬಣ್ಣದ ಮಡಕೆಯ ಮೇಲೆ ಬಿಳಿಯ ಬಣ್ಣದ ಗೆರೆಗಳುಳ್ಳ ಅಲಂಕಾರವೇ ಇದರಲ್ಲಿ ಅತಿ ಮುಖ್ಯವಾದುದು. ಇದರಲ್ಲಿ ವಿವಿಧ ವಿನ್ಯಾಸಗಳು ಕಂಡು ಬಂದು ವೈವಿಧ್ಯಮಯವಾದ ಅಲಂಕಾರದಿಂದ ಕೂಡಿದೆ. ಇದು ಇತಿಹಾಸ ಆರಂಭ ಕಾಲದ ಸಂಸ್ಕೃತಿಯ ಎಲ್ಲ ನೆಲೆಗಳಲ್ಲಿಯೂ ಹೇರಳವಾಗಿ ದೊರಕುತ್ತದೆ. ಆದುದರಿಂದ ಇದನ್ನೇ ಅತ್ಯಂತ ಪ್ರಮುಖ ಲಕ್ಷಣವೆಂದು ಪರಿಗಣಿಸಿದರೆ ತಪ್ಪಾಗುವುದಿಲ್ಲ. ಇದನ್ನು ಆ ಕಾಲದ ಪುರಾತತ್ವಜ್ಞರು ಆಂಧ್ರ ಮಡಕೆ ಎಂದು ಕರೆದರು. ಇದನ್ನು ಮುಂದೆ ಗಮನಿಸೋಣ. ಇನ್ನೊಂದು ಲಕ್ಷಣವೆಂದರೆ ಇಟ್ಟಿಗೆಯಿಂದ ಕಟ್ಟಲ್ಪಟ್ಟ ರಚನೆಗಳು. ಅವು ಯಾವುವೂ ಪೂರ್ಣವಾಗಿ ಉಳಿದಿಲ್ಲವಾದರೂ ಇಟ್ಟಿಗೆಯ ಬಳಕೆ ವ್ಯಾಪಕವಾಗಿದ್ದಿತೆಂದು ಮಾತ್ರ ತಿಳಿದು ಬಂದಿದೆ. ಇವುಗಳ ಜೊತೆಗೆ ಆಂಧ್ರ-ಶಾತವಾಹನರ ನಾಣ್ಯಗಳು ಈ ಸ್ತರಗಳಲ್ಲಿ ಹೇರಳವಾಗಿ ದೊರಕಿದ್ದು, ಕಾಲನಿರ್ಣಯಕ್ಕೆ ಬಲು ಸಹಕಾರಿಯಾಗಿವೆ. ಹೀಗೆ ಈ ಮೂರು ಲಕ್ಷಣಗಳು ಉತ್ಖನನಗಳಿಂದ ಕರ್ನಾಟಕದಲ್ಲಿ ವ್ಯಕ್ತಪಟ್ಟಿವೆ.

ಕರ್ನಾಟಕದಲ್ಲಿ ಇತಿಹಾಸ ಆರಂಭಕಾಲದ ಸ್ತರಗಳನ್ನು ಮೊಟ್ಟ ಮೊದಲು ಪತ್ತೆ ಮಾಡಿದವರು ಡಾ॥ ಎಂ. ಎಚ್. ಕೃಷ್ಣ.[1] ಅವರು ಚಂದ್ರವಳ್ಳಿಯಲ್ಲಿ ನಡೆಸಿದ ಉತ್ಖನನದಲ್ಲಿ ಈ ಕಾಲದ ಸ್ತರಗಳನ್ನು ಮೊದಲನೆಯ ಬಾರಿಗೆ ಗುರುತಿಸಿದರು. ಆಗಿನ ಕಾಲದಲ್ಲಿ ರೂಢಿಯಲ್ಲಿದ್ದಂತೆ ಅದನ್ನು ಅವರು ಶಾತವಾಹನ ಸಂಸ್ಕೃತಿ ಎಂದು ಕರೆದರು. ಏಕೆಂದರೆ ಆ ಸ್ತರಗಳಲ್ಲಿ ಶಾತವಾಹನ ರಾಜರ ನಾಣ್ಯಗಳು ದೊರಕಿದವು. ಇವುಗಳ ಜೊತೆಗೆ ಇಟ್ಟಿಗೆಯಿಂದ ಕಟ್ಟಲಾದ ಅವಶೇಷಗಳೂ ಮತ್ತು ಬಿಳಿಯ ರೇಖೆಗಳ ಅಲಂಕಾರವನ್ನುಳ್ಳ ಕೆಂಪನೆಯ ಮಡಕೆಯ ಚೂರುಗಳೂ ದೊರಕಿದವು. ಈ ಎಲ್ಲ ಅವಶೇಷಗಳ ಆಧಾರದ ಮೇಲೆ ಎಂ. ಎಚ್. ಕೃಷ್ಣ ಅವರು ಈ ಸಂಸ್ಕೃತಿಯನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿದರು: ಮೊದಲನೆಯದು ಆರಂಭದ ಕಾಲ; ಎರಡನೆಯದು ಆನಂತರದ ಕಾಲ. ಕಾಲಗಣನೆಗೆ ಅವರು ವಿಶೇಷವಾಗಿ ಉಪಯೋಗಿಸಿದ ವಸ್ತುಗಳೆಂದರೆ ನಾಣ್ಯಗಳು.

---

1. ಎಂ. ಎಚ್. ಕೃಷ್ಣ : ಎಕ್ಸ್‌ಕವೇಷನ್ ಎಟ್ ಚಂದ್ರವಳ್ಳಿ, ಬೆಂಗಳೂರು, ೧೯೩೧

ಸರ್ ಮಾರ್ಟಿಮರ್ ವ್ಹೀಲರ್ ಅವರು ೧೯೪೭ ಚಂದ್ರವಳ್ಳಿಯಲ್ಲಿ ಪುನಃ ಉತ್ಖನನಗಳನ್ನು ನಡೆಸಿದರು.[2] ಇವರು ಇತಿಹಾಸ ಆರಂಭದ ಕಾಲವನ್ನು ಸ್ಪಷ್ಟವಾಗಿ ಶಾತವಾಹನ ಕಾಲ ಎಂದೇ ಕರೆದರು. ಆದರೆ ಇದನ್ನು ಇವರು ಮೂರು ಭಾಗಗಳಾಗಿ ವಿಂಗಡಿಸಿದರು: ಆರಂಭದ ಆಂಧ್ರ; ಮಧ್ಯಕಾಲೀನ ಆಂಧ್ರ ಮತ್ತು ಇತ್ತೀಚಿನ ಆಂಧ್ರ ಎಂಬುವೇ ಅವರು ಮಾಡಿದ ವಿಭಾಗಗಳು. ಇದಕ್ಕೆ ಅವರು ಕೊಟ್ಟ ಆಧಾರಗಳು ಹೀಗಿವೆ: ಮೊದಲನೆಯ ಹಂತದಲ್ಲಿ ಮೆಗಾಲಿತಿಕ್ ಸಂಸ್ಕೃತಿಯ ಮಡಕೆಗಳ ಜೊತೆಗೆ ಬಿಳಿ (ಹಳದಿ) ಬಣ್ಣದ ಅಲಂಕಾರದ ಮಡಕೆಗಳು ದೊರಕಿದವು. ಆದರೆ ಮೆಗಾಲಿತಿಕ್ ಮಡಕೆಯ ಚೂರುಗಳು ಬಹಳ ಕಡಿಮೆಯ ಪ್ರಮಾಣದಲ್ಲಿ ಇದ್ದುದರಿಂದ, ಆ ಸಂಸ್ಕೃತಿಯು ಇಳಿಮುಖದಲ್ಲಿತ್ತು ಎಂಬುದನ್ನು ಅವರು ಊಹಿಸಿದರು. ಎರಡನೆಯ ಹಂತದಲ್ಲಿ ಮೆಗಾಲಿತಿಕ್ ಮಡಕೆಯು ಸ್ವಲ್ಪವೂ ಇಲ್ಲದೆ, ಬಿಳಿ ಬಣ್ಣದ ಅಲಂಕಾರದ ಮಡಕೆಗಳು ಏಕಾಏಕಿ ಹೆಚ್ಚಿದವು. ಮೂರನೆಯ ಹಂತದಲ್ಲಿ ಈ ಮಡಕೆಯ ಚೂರುಗಳೂ ಇಳಿಮುಖವಾಗತೊಡಗಿದವು.

ಇವುಗಳ ಜೊತೆಗೆ ಆಂಧ್ರ-ಶಾತವಾಹನ ರಾಜರ ನಾಣ್ಯಗಳು, ಮಹಾರಥಿಯವರ ನಾಣ್ಯಗಳು, ರೋಮನ್ ನಾಣ್ಯಗಳು ಬೆಳಕಿಗೆ ಬಂದವು. ಇವುಗಳಲ್ಲಿಯೂ ಕಾಲನಿರ್ಣಯಕ್ಕೆ ಅನುಕೂಲವಾದ ವಾಸಿಷ್ಠೀಪುತ, ಪುಳುಮಾವಿ, ಯಜ್ಞಶಾತಕರ್ಣಿಯ ನಾಣ್ಯಗಳು ಮತ್ತು ಟೈಬೀರಿಯಸ್ ಚಕ್ರವರ್ತಿಯ ಕ್ರಿ. ಶ. ೧೪-೩೭ ರಲ್ಲಿ ಟಂಕಿಸಲ್ಪಟ್ಟ ನಾಣ್ಯ ಮುಖ್ಯವಾದವು. ಅಂದರೆ ವ್ಹೀಲರ್ ಅವರ ಪ್ರಕಾರ ಇತಿಹಾಸ ಆರಂಭಕಾಲದ ಸಂಸ್ಕೃತಿಯಲ್ಲಿ ಬಿಳಿಬಣ್ಣದ ಅಲಂಕಾರವುಳ್ಳ ಮಡಕೆ, ಆಂಧ್ರರ ನಾಣ್ಯ, ರೋಮನ್ ನಾಣ್ಯ ಮತ್ತು ಕೆಲವು ಶಿಥಿಲವಾದ ಇಟ್ಟಿಗೆಯ ಕಟ್ಟಡಗಳೂ ಸೇರಿದ್ದವು.

ವ್ಹೀಲರ್‌ರವರು ಬ್ರಹ್ಮಗಿರಿಯಲ್ಲಿ ನಡೆಸಿದ ಉತ್ಖನನದಲ್ಲಿಯೂ ಇದೇ ರೀತಿಯ ಸಂಸ್ಕೃತಿಯನ್ನು ಗುರುತಿಸಿದರು.[3] ಮೆಗಾಲಿತಿಕ್ ಸಂಸ್ಕೃತಿಯ ನಂತರದ ಕಾಲಕ್ಕೆ ಸೇರಬಹುದಾದ, ಅಂದರೆ ಕ್ರಿ.ಶ. ಮೊದಲನೆಯ ಶತಮಾನದಿಂದ ಮೂರನೆಯ ಶತಮಾನದವರೆಗಿನ ಕಾಲಕ್ಕೆ ಸೇರಬಹುದೆಂದು ಅವರು ನಿರ್ಣಯಿಸಿದರು. ಬಿಳಿಯ ಬಣ್ಣದ ಅಲಂಕಾರವನ್ನು ಹೊಂದಿದ ಕೆಂಪು ಮಡಕೆಗಳು ಮಾತ್ರ ರೋಮನ್ ಕಾಲಕ್ಕೆ ಸೇರುವ 'ರೌಲೆಟೆಡ್' ಮಡಕೆಯ ಚೂರುಗಳೂ ಹೇರಳವಾಗಿ ದೊರಕಿದವು. ಅಗೇಟ್, ಕಾರ್ನೀಲಿಯನ್ ಮತ್ತು ಮಣ್ಣಿನ ಮಣಿಗಳೂ ಸಿಕ್ಕಿದವು. ಇನ್ನೊಂದು ಆಕರ್ಷಣೆಯೆಂದರೆ ಚೈತ್ಯದ ಮಾದರಿಯ ಗಜಪೃಷ್ಠಾಕಾರದ ಇಟ್ಟಿಗೆಯ ಕಟ್ಟಡ. ಆದರೆ ಇಲ್ಲಿ ನಾಣ್ಯಗಳು ಅಷ್ಟಾಗಿ ದೊರಕಲಿಲ್ಲ.

ಬಿ.ಕೆ. ಥಾಪರ್ ಅವರು ಮಸ್ಕಿಯಲ್ಲಿ ೧೯೫೪ರಲ್ಲಿ ಉತ್ಖನನ ನಡೆಸಿದರು.[4] ಇವರು ಆಂಧ್ರ ಸಂಸ್ಕೃತಿಯೆನ್ನುವ ಪದವನ್ನು ಬಳಸದೆ, ಇತಿಹಾಸ ಆರಂಭದ ಕಾಲದ ಸಂಸ್ಕೃತಿ ಎನ್ನುವ ಪದವನ್ನು ಮೊದಲ ಬಾರಿಗೆ ಕರ್ನಾಟಕ ಪುರಾತತ್ವದಲ್ಲಿ ಬಳಕೆಗೆ ತಂದರು. ಆಂಧ್ರ ಮಡಕೆ ಅಥವಾ ಆಂಧ್ರ ಸಂಸ್ಕೃತಿ ಎನ್ನುವುದಕ್ಕೆ ಅರ್ಥವಿಲ್ಲ; ಈ ಪದಗಳನ್ನು ಬಳಸಬಾರದು; ಅವುಗಳು ಸೂಚಿಸುವ ಅರ್ಥವೇ ಬೇರೆ. ಆಂಧ್ರ ನಾಣ್ಯಗಳು ದೊರೆತ ಮಾತ್ರಕ್ಕೆ ಆ ಸಂಸ್ಕೃತಿಯನ್ನು ಆಂಧ್ರ ಸಂಸ್ಕೃತಿ ಎಂದು ಕರೆಯಲಾಗುವುದಿಲ್ಲ. ಹಾಗಾದರೆ ಜೊತೆಗೆ ರೋಮನ್ ನಾಣ್ಯಗಳೂ ದೊರಕುವುದರಿಂದ ಆ ಸಂಸ್ಕೃತಿಯನ್ನು ಏನೆಂದು ಕರೆಯಬೇಕು; ಆಂಧ್ರ-ರೋಮನ್ ಸಂಸ್ಕೃತಿ ಎನ್ನಬೇಕೇ ಎಂದು ಇವರು ವಾದಿಸುತ್ತಾರೆ. ಆದುದರಿಂದ ಇದಕ್ಕೆ ಇನ್ನೊಂದು ಬೇರೆಯ ಹೆಸರನ್ನೇ ಕೊಡಬೇಕು ಎಂದು ಹೇಳುತ್ತಾರೆ. ಈ ಸಂಸ್ಕೃತಿಯು ಮೆಗಾಲಿತಿಕ್ ಸಂಸ್ಕೃತಿಯ ಅಂದರೆ ಇತಿಹಾಸ ಪೂರ್ವಕಾಲದ ಸಂಸ್ಕೃತಿಯ ಅನಂತರ ಕಾಲದ್ದಾದುದರಿಂದ, ಇದನ್ನು ಇತಿಹಾಸ ಆರಂಭದ ಕಾಲದ

---

2. ವ್ಹೀಲರ್ : ಏನ್ಷಂಟ್ ಇಂಡಿಯ, ಸಂಪುಟ ೪, ಪು. ೨೭೦
3. ಅದೇ, ಪು. ೨೦೨
4. ಅದೇ, ಸಂಪುಟ ೧೩, ಪು. ೪

ಸಂಸ್ಕೃತಿ ಎಂದು ಕರೆಯಬೇಕಾದುದು ಹೆಚ್ಚು ಸಮಂಜಸವಾದುದು. ಇವರು ಇಲ್ಲಿ ದೊರೆಯುವ ಬಿಳಿಬಣ್ಣದ ಅಲಂಕಾರವನ್ನುಳ್ಳ ಕೆಂಪು ಮಡಕೆಗೆ ಹೆಚ್ಚು ಪ್ರಾಮುಖ್ಯ ನೀಡಿ, ಈ ಸಂಸ್ಕೃತಿಯನ್ನು ಈ ಮಡಕೆಯ ಲಕ್ಷಣದೊಂದಿಗೇ ಸೇರಿಸಬೇಕು ಎಂದು ಅಭಿಪ್ರಾಯ ಪಡುತ್ತಾರೆ. ಇಲ್ಲಿ ಈ ಮಡಕೆಯು ಮುಂದುವರೆದು ರೂಪದಲ್ಲಿ ದೊರೆಯುವುದು ಮಾತ್ರವಲ್ಲದೆ ವೈವಿಧ್ಯಪೂರ್ಣವಾದ ಅಲಂಕಾರಗಳನ್ನು ತೋರಿಸುತ್ತದೆ. ಅಂದರೆ ಈ ಸಂಸ್ಕೃತಿಯಲ್ಲಿ ಈ ಮಡಕೆಯು ಅತ್ಯಂತ ಪ್ರಭಾವಶಾಲಿಯಾದ ರೀತಿಯಲ್ಲಿ ಬಳಕೆಯಲ್ಲಿದ್ದಿತು ಎಂದು ವಿದಿತವಾಗುತ್ತದೆ. ಇದರ ಜೊತೆಗೆ ವಿವಿಧ ರೀತಿಯ ಮಣಿಗಳು ಮತ್ತು ಮಣ್ಣಿನ ಬೊಂಬೆಗಳು ದೊರಕಿದವು. ರುಂಡವಿಲ್ಲದ ಸ್ತ್ರೀಯ ಬೊಂಬೆಯಲ್ಲಿ, ಬಟ್ಟೆ, ಕಂಠಾಭರಣ, ಹಿಂಭಾಗದಲ್ಲಿ ಜಡೆಗಳು ಕಾಣಬರುತ್ತವೆ. ಇನ್ನೊಂದು ಗಿಣಿಯ ಬೊಂಬೆ. ಈ ಎರಡು ಬೊಂಬೆಗಳೂ ಸುಂದರವಾಗಿ ಮಾಡಲ್ಪಟ್ಟಿವೆ. ಇವು ಈ ಸಂಸ್ಕೃತಿಯ ಮೇಲಿನ ಸ್ತರಗಳಲ್ಲಿ ದೊರಕಿರುವುದು ಗಮನಾರ್ಹ ಸಂಗತಿ.

ಮಸ್ಕಿಯಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಹೇರಳವಾಗಿ ದೊರಕಿರುವ ಬಳೆಗಳು. ಅದರಲ್ಲಿಯೂ ಮೇಲಿನ ಸ್ತರಗಳಲ್ಲಿ ದೊರಕಿರುವ ಬಳೆಗಳು ಕಲಾತ್ಮಕವಾಗಿದ್ದು, ಕೆತ್ತನೆಯ ಅಲಂಕಾರವನ್ನು ಹೊಂದಿವೆ. ಇವುಗಳ ಜೊತೆಯಲ್ಲಿ ಒಂದು ಬೆರಳುಂಗುರವೂ ದೊರಕಿದೆ. ಒಟ್ಟಿನಲ್ಲಿ ಮಸ್ಕಿಯಲ್ಲಿ ದೊರೆತ ಅವಶೇಷಗಳು ಇತರ ನೆಲೆಗಳಲ್ಲಿ ದೊರಕಿರುವ ಅವಶೇಷಗಳಿಗಿಂತ ಹೆಚ್ಚು ಮುಂದುವರೆದ ಹಂತವನ್ನು ವ್ಯಕ್ತಪಡಿಸುತ್ತವೆ ಎಂಬುದು ಖಚಿತವಾಗುತ್ತದೆ. ಈ ಸಂಸ್ಕೃತಿಯು ಕ್ರಿ.ಶ. ಒಂದನೆಯ ಶತಮಾನದಿಂದ ಮೂರನೆಯ ಶತಮಾನದವರೆಗೆ ಪ್ರಚಲಿತವಾಗಿದ್ದಿತು.

ಮೈಸೂರಿಗೆ ಸಮೀಪದಲ್ಲಿರುವ ತಿರಮಕೂಡ್ಲು ನರಸೀಪುರದಲ್ಲಿ ಡಾ|| ಶೇಷಾದ್ರಿಯವರ ನೇತೃತ್ವದಲ್ಲಿ ನಡೆದ ಉತ್ಖನನದಲ್ಲಿ ದೊರಕಿರುವ ಸಂಸ್ಕೃತಿಗಳಲ್ಲಿ ಇತಿಹಾಸ ಆರಂಭಕಾಲವೂ ಒಂದು.[5] ಇದು ಮಸ್ಕಿಯ ಸಂಸ್ಕೃತಿಯಂತೆಯೇ ಇದ್ದು ಬಿಳಿಯ ಬಣ್ಣದ ಅಲಂಕಾರದ ಕೆಂಪು ಮಡಕೆ, ಮಣಿಗಳು, ಮಣ್ಣಿನ ಬೊಂಬೆಗಳು ಮತ್ತು ಬಳೆಗಳನ್ನು ಒಳಗೊಂಡಿದೆ. ಇದರ ಕಾಲ ಸು. ಕ್ರಿ.ಶ. ಒಂದನೆಯ ಶತಮಾನ. ನರಸೀಪುರಕ್ಕೆ ಬಲು ಸಮೀಪದಲ್ಲೇ ಇರುವ ಹೆಮ್ಮಿಗೆಯಲ್ಲಿಯೂ ಈ ಸಂಸ್ಕೃತಿಯ ಸ್ತರಗಳು ಗುರುತಿಸಲ್ಪಟ್ಟಿವೆ.[6] ಇಲ್ಲಿಯೂ ಬಿಳಿಯ ಅಲಂಕಾರದ ಮಡಕೆ, ಮಣಿಗಳು ದೊರಕಿವೆ.

ಹಳ್ಳೂರಿನಲ್ಲಿ ಖಚಿತವಾದ ಇತಿಹಾಸ ಆರಂಭಕಾಲದ ಸಂಸ್ಕೃತಿಯ ಸ್ತರಗಳು ದೊರಕಿಲ್ಲ.[7] ಆದರೆ ಬಿಳಿಯ ಬಣ್ಣದ ಅಲಂಕಾರದ ಮಡಕೆಗಳು ದೊರಕಿರುವುದು ಗಮನಾರ್ಹ. ಬನವಾಸಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದವರು ನಡೆಸಿದ ಉತ್ಖನನದಲ್ಲಿ ಉತ್ತಮವಾದ ಮಾಹಿತಿಯು ದೊರಕಿರುವುದನ್ನು ಗಮನಿಸಬೇಕು.[8] ಇಲ್ಲಿ ಬಲು ವಿಶಾಲವಾದ ಗಜಪೃಷ್ಠಾಕೃತಿಯ ಇಟ್ಟಿಗೆಯ ಕಟ್ಟಡಗಳು ದೊರಕಿದವು. ಕೆಂಪು ಮಡಕೆ, ಕಪ್ಪು ಮಡಕೆ, ರೌಲೆಟೆಡ್ ಮಡಕೆಗಳ ಜೊತೆಗೆ ಬಿಳಿಯ ಬಣ್ಣದ ಅಲಂಕಾರವುಳ್ಳ ಕೆಂಪು ಮಡಕೆಯ ಚೂರುಗಳು ಹೇರಳವಾಗಿ ದೊರಕಿದವು. ಇವುಗಳ ಜೊತೆಯಲ್ಲಿ ಒಂದು ಪಂಚ್ ಮಾರ್ಕ್ ನಾಣ್ಯವೂ ದೊರಕಿತು.[8] ಚುಟುಕುಲಾನಂದ, ಮುಡಾನಂದ ರಾಜರ ಸೀಸದ ನಾಣ್ಯಗಳ ಜೊತೆಗೆ ಶಾತವಾಹನ ರಾಜರ ಸೀಸದ ನಾಣ್ಯಗಳೂ ದೊರಕಿದವು. ಇಲ್ಲಿ ರೋಮನ್ ನಾಣ್ಯದ ಒಂದು ಅಚ್ಚು ಮತ್ತು ರೋಮನ್ ಕಾಲದ ಮಡಕೆಗಳು ದೊರಕಿದವು.[9] ಈ ಅಚ್ಚಿನಲ್ಲಿ ಆಸನದ ಮೇಲೆ ಕುಳಿತು, ರಾಜ

---

5. ಎಂ. ಶೇಷಾದ್ರಿ : ಎಕ್ಸ್‌ಕವೇಷನ್ ಎಟ್ ಟಿ. ನರಸೀಪುರ, ಪು. ೮
6. ಹನುಮಂತರಾವ್ ಮತ್ತು ನಾಗರಾಜು : ಎಕ್ಸ್‌ಕವೇಷನ್ ಎಟ್ ಹೆಮ್ಮಿಗೆ, ಪು. ೨೫
7. ಎಂ. ಎಸ್. ನಾಗರಾಜರಾವ್ : ಪ್ರೋಟೊ ಹಿಸ್ಟಾರಿಕ್ ಕಲ್ಚರ್ ಆಫ್ ತುಂಗಭದ್ರಾ ವ್ಯಾಲಿ, ಪು. ೬೮
8. ಎ. ವಿ. ನರಸಿಂಹಮೂರ್ತಿ : ಕಾಯಿನ್ಸ್ ಆಫ್ ಕರ್ನಾಟಕ, ಪು. ೫೮
9. ಎ. ವಿ. ನರಸಿಂಹಮೂರ್ತಿ : ಜರ್ನಲ್ ಆಫ್ ನ್ಯೂಮಿಸ್‌ಮ್ಯಾಟಿಕ್ ಸೊಸೈಟಿ ಆಫ್ ಇಂಡಿಯ, ಸಂಪುಟ XLVI, ಪು. ೪೫

ದಂಡವನ್ನು ಹಿಡಿದಿರುವ ಸ್ತ್ರೀಯ ಚಿತ್ರವಿದೆ. ಇಲ್ಲಿ ದೊರಕಿರುವ ನಾಲ್ಕಾರು ಸುಟ್ಟಮಣ್ಣಿನ ಬೊಂಬೆಗಳು ಗಮನಾರ್ಹವಾದವು. ಅವು ಮಥುರಾ ಕಾಲದ ಬೊಂಬೆಗಳನ್ನು ಹೋಲುತ್ತವೆ. ಇವುಗಳ ಜೊತೆಗೆ ಮಣಿಗಳು, ಬಳೆಗಳು ದೊರಕಿವೆ. ಇಲ್ಲಿ ದೊರಕಿರುವ ಕಟ್ಟಡಗಳ ಇಟ್ಟಿಗೆಗಳು, ಇತರ ಶಾತವಾಹನ ನೆಲೆಗಳಲ್ಲಿ ದೊರಕಿರುವ ಇಟ್ಟಿಗೆಗಳನ್ನು ಗಾತ್ರ ಮತ್ತು ಗುಣಗಳಲ್ಲಿ ಹೋಲುತ್ತವೆ. ಇಲ್ಲಿ ಒಂದು ಶಾತವಾಹನರ ಶಾಸನವೂ ದೊರಕಿದ್ದು, ಇದು ಶಿವಶ್ರೀ ಪುಳುಮಾವಿಯ ಶಾಸನಕ್ಕೆ ಒಳಪಟ್ಟಿದ್ದಿತು ಎಂಬುದನ್ನು ತೋರಿಸುತ್ತದೆ.[10] ಒಟ್ಟಿನಲ್ಲಿ ಕ್ರಿ. ಶ. ಒಂದನೆಯ ಶತಮಾನದಿಂದ ಆರಂಭವಾಗಿ ಮೂರನೆಯ ಶತಮಾನದವರೆಗಿನ ಸಂಸ್ಕೃತಿಯನ್ನು ಇಲ್ಲಿ ಸ್ಪಷ್ಟವಾಗಿ ಕಾಣಬಹುದಾಗಿದೆ.

ಬೆಳಗಾವಿಗೆ ಸಮೀಪದಲ್ಲಿರುವ ವಡಗಾಂವ ಮಾಧವಪುರದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದವರು ಉತ್ಖನನ ನಡೆಸಿದರು.[11] ಇದು ಇತಿಹಾಸ ಆರಂಭ ಕಾಲದ ಸಂಸ್ಕೃತಿಗೆ ಉತ್ತಮ ಉದಾಹರಣೆಯಾಗಿದೆ. ಇಲ್ಲಿನ ಸಂಸ್ಕೃತಿಯನ್ನು ಮೂರು ಭಾಗವಾಗಿ ವಿಂಗಡಿಸಲಾಗಿದೆ. ಇದರ ಮೂರನೆಯ ಸ್ತರದಲ್ಲಿ ಬಿಳಿಯ ಬಣ್ಣದ ಅಲಂಕಾರವುಳ್ಳ ಕೆಂಪು ಬಣ್ಣದ ಮಡಕೆಯು ಹೇರಳವಾಗಿ ದೊರಕಿದೆ. ಶಾತವಾಹನ ಕಾಲದ ಇಟ್ಟಿಗೆಯ ಕಟ್ಟಡಗಳೂ ಇಲ್ಲಿ ಉತ್ಖನನದಲ್ಲಿ ದೊರಕಿದವು. ಈ ಕಟ್ಟಡಗಳ ಜೊತೆಯ ಸ್ತರಗಳಲ್ಲಿ ಶಾತವಾಹನ ನಾಣ್ಯಗಳು ಕಂಡು ಬಂದವು. ಇವುಗಳ ಜೊತೆಯಲ್ಲಿಯೇ ಸುಟ್ಟ ಮಣ್ಣಿನ ಬೊಂಬೆಗಳು ದೊರಕಿದವು. ಒಟ್ಟಿನಲ್ಲಿ ಇಲ್ಲಿ ಬಿಳಿಯ ಬಣ್ಣದ ಅಲಂಕಾರದ ಮಡಕೆ, ಇಟ್ಟಿಗೆಯ ಕಟ್ಟಡಗಳು, ಶಾತವಾಹನ ನಾಣ್ಯ, ಬೊಂಬೆಗಳು ದೊರಕಿದ್ದು, ಇವೆಲ್ಲವೂ ಇತಿಹಾಸ ಆರಂಭಕಾಲಕ್ಕೆ ಸೇರಿದವುಗಳಾಗಿವೆ.

ಗುಲ್ಬರ್ಗ ಜಿಲ್ಲೆಯ ಸನ್ನತಿಯಲ್ಲಿ ಇತಿಹಾಸ ಆರಂಭ ಕಾಲದ ಸಂಸ್ಕೃತಿಯ ಅವಶೇಷಗಳು ನೆಲದ ಮೇಲೆ ದೊರಕಿವೆ. ಇಲ್ಲಿ ಉತ್ಖನನ ಇನ್ನೂ ನಡೆದಿಲ್ಲವಾದುದರಿಂದ ಸ್ಪಷ್ಟವಾದ ಚಿತ್ರ ಇನ್ನೂ ದೊರಕಬೇಕಾಗಿದೆ. ಆದರೆ ಇಲ್ಲಿ ಶಾತವಾಹನ ಶೈಲಿಯ ಶಿಲ್ಪಗಳು, ಇಟ್ಟಿಗೆಯ ಕಟ್ಟಡಗಳು, ಬೊಂಬೆಗಳು, ಶಾಸನಗಳು ಹೇರಳವಾಗಿ ದೊರಕಿದ್ದು, ಈ ನೆಲೆ ಕ್ರಿ.ಶ. ಎರಡನೆಯ ಮತ್ತು ಮೂರನೆಯ ಶತಮಾನಗಳಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದಿತೆಂಬುದನ್ನು ಸ್ಪಷ್ಟಪಡಿಸುತ್ತದೆ.[12] ಇಲ್ಲಿ ವಿಪುಲವಾದ ಉತ್ಖನನ ನಡೆದರೆ ಕರ್ನಾಟಕದ ಇತಿಹಾಸ ಆರಂಭಕಾಲದ ಸಂಸ್ಕೃತಿಯ ಮೇಲೆ ವಿಶೇಷ ಬೆಳಕು ಚೆಲ್ಲುತ್ತದೆ ಎಂಬುದನ್ನು ಗಮನಿಸಬೇಕು.

ಆಲ್‌ಚಿನ್‌ರವರು ಪೀಕ್ಲಿಹಾಳದಲ್ಲಿ ನಡೆಸಿದ ಉತ್ಖನನದಲ್ಲಿಯೂ ಈ ಕಾಲದ ಸಂಸ್ಕೃತಿಯ ಅವಶೇಷಗಳು ಬೆಳಕಿಗೆ ಬಂದಿವೆ.[13] ಆಲ್‌ಚಿನ್‌ರವರ ಪ್ರಕಾರ ಇಲ್ಲಿನ ಸಂಸ್ಕೃತಿ ಬ್ರಹ್ಮಗಿರಿಯ ಆಂಧ್ರಸಂಸ್ಕೃತಿಗೆ ಸಮನಾಗಿದೆ. ಇದರ ಕಾಲವನ್ನು ಕ್ರಿ.ಶ. ಒಂದರಿಂದ ಮೂರನೆಯ ಶತಮಾನದವರೆಗೆ ಅಂದಾಜು ಮಾಡಲಾಗಿದೆ. ಐಹೊಳೆ ಮತ್ತು ಪಟ್ಟದಕಲ್ಲುಗಳಲ್ಲಿ ನಡೆದ ಸಂಶೋಧನೆಗಳಲ್ಲಿ ಡಾ॥ ಎಸ್. ಆರ್. ರಾಯರು ಶಾತವಾಹನ ಕಾಲದ ಇಟ್ಟಿಗೆಯ ಕಟ್ಟಡ, ನಾಣ್ಯಗಳು ಮತ್ತು ಬಿಳಿಯ ಬಣ್ಣದ ಅಲಂಕಾರದ ಕೆಂಪು ಮಡಕೆಗಳನ್ನು ಗುರುತಿಸಿದ್ದಾರೆ.[14] ಬಳ್ಳಾರಿಗೆ ಸಮೀಪದಲ್ಲಿರುವ ಕುರುಗೋಡಿನಲ್ಲಿ ಇತಿಹಾಸ ಆರಂಭಕಾಲದ ನೆಲೆಯನ್ನು ಗುರುತಿಸಲಾಗಿದೆ.[15] ಶಾತವಾಹನ ಕಾಲದ ಇಟ್ಟಿಗೆಗಳು ಮತ್ತು ಬಿಳಿಯ ಬಣ್ಣದ ಅಲಂಕಾರವುಳ್ಳ ಕೆಂಪು ಮಡಕೆಯೂ ಇಲ್ಲಿ ದೊರಕಿದೆ. ಇವುಗಳಲ್ಲದೆ ಮೈಸೂರು, ಧಾರವಾಡ, ಗುಲ್ಬರ್ಗ, ಬಿಜಾಪುರ ಮುಂತಾದ ಜಿಲ್ಲೆಗಳಲ್ಲಿ ನಡೆದ ಶೋಧನೆಗಳಿಂದ

---

10. ಜರ್ನಲ್ ಆಫ್ ಇಂಡಿಯನ್ ಎಫಿಗ್ರಾಫಿಕಲ್ ಸೊಸೈಟಿ, ಸಂಪುಟ ೪, ಪು. ೧೦೪
11. ಕರ್ನಾಟಕ ಭಾರತಿ, ಸಂಪುಟ ೫, ಪು. ೭೫
12. ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ, ಸಂಪುಟ LVI, ಪು. ೩೫
13. ಎಫ್. ಆರ್. ಆಲ್‌ಚಿನ್ : ಪೀಕ್ಲಿಹಾಳ್ ಎಕ್ಸ್‌ಕವೇಷನ್ಸ್, ಪ. XVI
14. ಶ್ರೀಕಂಠಿಕಾ, ಪು. ೨೩
15. ಆರ್ಕಿಯೋಲಾಜಿಕಲ್ ಸ್ಟಡೀಸ್ (ಎ. ವಿ. ನರಸಿಂಹಮೂರ್ತಿ), ಸಂಪುಟ, ೬ ಪು. ೬೦

ನೆಲದ ಮೇಲೆ ದೊರಕಿರುವ ಅವಶೇಷಗಳಿಂದ ಇತಿಹಾಸ ಆರಂಭ ಕಾಲದ ಸಂಸ್ಕೃತಿಯ ನೆಲೆಗಳು ಬೆಳಕಿಗೆ ಬಂದಿವೆ. ಆದರೆ ಇವುಗಳಲ್ಲಿ ಉತ್ಖನನ ನಡೆದಿಲ್ಲದೇ ಇರುವುದು ಮುಖ್ಯ ಕೊರತೆಯಾಗಿದೆ.

ಈ ಮೇಲಿನ ಎಲ್ಲ ಮಾಹಿತಿಗಳನ್ನೂ ಪರಿಶೀಲಿಸಿದರೆ ತಿಳಿದುಬರುವ ಸಂಗತಿಗಳನ್ನು ಈ ರೀತಿ ನಿರೂಪಿಸಬಹುದು : ಮೊದಲನೆಯದಾಗಿ ಈ ಎಲ್ಲ ನೆಲೆಗಳಲ್ಲೂ ಅತ್ಯಂತ ಪ್ರಮುಖ ಸಂಗತಿಯೆಂದರೆ ಬಿಳಿಬಣ್ಣದ ಅಲಂಕಾರವನ್ನುಳ್ಳ ಕೆಂಪು ಮಡಕೆಯು ಹೆಚ್ಚು ಕಡಿಮೆ ವಿಶೇಷ ಪ್ರಮಾಣದಲ್ಲಿ ದೊರಕಿರುವುದು. ಈ ಅಲಂಕಾರ ವಿನ್ಯಾಸಗಳಲ್ಲಿ ವೈವಿಧ್ಯತೆಯಿರಬಹುದು ಇಲ್ಲದಿರಬಹುದು; ಆದರೆ ಅವುಗಳನ್ನು ತಯಾರಿಸುವ ರೀತಿ ಒಂದೇ ತೆರನಾಗಿರುವುದು. ಅಂದರೆ ಇದೊಂದು ಖಾತರಿಯಾದ ಲಕ್ಷಣವೆಂದಾಯಿತು. ಇದನ್ನು ಗಮನದಲ್ಲಿಡಬೇಕು. ಇಷ್ಟೊಂದು ಪ್ರಾಮುಖ್ಯವಲ್ಲದಿದ್ದರೂ ಕೆಲ ನೆಲೆಗಳಲ್ಲಿ ಕಾಣಬರುವ ಇನ್ನೊಂದು ಅಂಶವೆಂದರೆ ಇಟ್ಟಿಗೆಯ ಕಟ್ಟಡಗಳು. ಈ ಎಲ್ಲ ಇಟ್ಟಿಗೆಯ ಕಟ್ಟಡಗಳಲ್ಲಿಯೂ ಕಾಣಬರುವ ಒಂದು ಅಂಶವೆಂದರೆ ಅವುಗಳ ಗಣ, ಗುಣ ಮತ್ತು ಗಾತ್ರಗಳಲ್ಲಿ ಸಾಮ್ಯತೆ. ಶಾತವಾಹನ ರಾಜರ ನಾಣ್ಯಗಳು, ಅವರ ಅಧೀನ ರಾಜವಂಶಗಳಾದ ಚುಟುಕುಲದವರ ಮತ್ತು ಮಹಾರಥಿಗಳ ಸೀಸದ ನಾಣ್ಯಗಳು ಮತ್ತೊಂದು ಗಮನಾರ್ಹ ಅಂಶ. ಇವುಗಳಲ್ಲಿಯೂ ಹೆಚ್ಚಾಗಿ ಅನಂತರದ ಶಾತವಾಹನ ರಾಜರ ನಾಣ್ಯಗಳೇ ಜಾಸ್ತಿ. ಕೆಲವು ನೆಲೆಗಳಲ್ಲಿ ಮಾತ್ರ ದೊರಕಿರುವ ಸುಟ್ಟ ಮಣ್ಣಿನ ಬೊಂಬೆಗಳು ಈ ಸಂಸ್ಕೃತಿಯ ಮತ್ತೊಂದು ಅಂಶ. ರೋಮನ್ ಸಂಸ್ಕೃತಿಯ ಅವಶೇಷಗಳಾದ ನಾಣ್ಯಗಳು ಮತ್ತು ರೌಲೇಟೆಡ್ ಮಡಕೆಗಳು ಕೆಲವು ನೆಲೆಗಳಲ್ಲಿ ಮಾತ್ರ ಕಂಡುಬರುತ್ತವೆ. ಈ ಎಲ್ಲ ಲಕ್ಷಣಗಳೂ ಒಟ್ಟಾರೆ ಕಾಣಬರುವುದು ಚಂದ್ರವಳ್ಳಿ, ಬ್ರಹ್ಮಗಿರಿ ಮತ್ತು ಬನವಾಸಿ ನೆಲೆಗಳಲ್ಲಿ. ಈಗ ತಿಳಿದಿರುವಂತೆ ಈ ನೆಲೆಗಳು ವ್ಯಾಪಕವಾದವು ಮಾತ್ರವಲ್ಲದೆ ಬಹಳಷ್ಟು ಕಾಲ ಈ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದವು. ಆದರೆ ಎಲ್ಲ ನೆಲೆಗಳಲ್ಲಿಯೂ ಕಂಡುಬರುವ ಅಂಶವೆಂದರೆ ಬಿಳಿಯ ಬಣ್ಣದ ಅಲಂಕಾರವನ್ನು ಹೊಂದಿದ ಕಂದು ಅಥವಾ ಕೆಂಪು ಮಡಕೆ. ಆದುದರಿಂದ ಈ ರೀತಿಯ ಮಡಕೆಯನ್ನು ಇತಿಹಾಸ ಆರಂಭ ಕಾಲದ ಅತ್ಯಂತ ಪ್ರಮುಖ ಲಕ್ಷಣವಾಗಿ ಪರಿಗಣಿಸಲೇ ಬೇಕಾಗುತ್ತದೆ. ಇದು ವ್ಯಾಪಕವಾದುದಾದುದರಿಂದ, ಶೋಧನೆಯಲ್ಲಿ ಸುಲಭವಾಗಿ ದೊರಕಲೂ ಸಾಧ್ಯ.

ಈ ಸಂಸ್ಕೃತಿಯನ್ನು ವರ್ಣಿಸುವಾಗ ಅನೇಕ ವಿಭಾಗಗಳನ್ನು ಪುರಾತತ್ವಜ್ಞರು ಮಾಡಿದ್ದಾರೆಂಬುದನ್ನು ನಾವು ಆಗಲೇ ಗಮನಿಸಿದ್ದೇವೆ. ಪ್ರಾಚೀನ, ಮಧ್ಯಕಾಲೀನ ಮತ್ತು ಇತ್ತೀಚಿನ ಎನ್ನುವ ವಿಭಾಗ ತೀರಾ ಅಸಮರ್ಪಕವೆನಿಸುತ್ತದೆ. ಜೊತೆಗೆ ಇವುಗಳ ಕಾಲ ನಿರ್ಣಯವೂ ಬಲು ತೊಡಕಿನ ವಿಷಯ. ಮೆಗಾಲಿತಿಕ್ ಸಂಸ್ಕೃತಿಯ ನಂತರ, ಇತಿಹಾಸದ ಕಾಲ ಆರಂಭವಾಯಿತೆಂದು ನಂಬುವುದಾದರೆ ಇದನ್ನು ಮೆಗಾಲಿತಿಕ್ ಸಂಸ್ಕೃತಿಯ ಅನಂತರದ ಕಾಲಮಾನಕ್ಕೆ ಸೇರಿಸಬೇಕಾಗಿರುತ್ತದೆ. ಈ ಮಧ್ಯದ ಅವಧಿಯಲ್ಲಿ ಮೌರ್ಯವಂಶದ ಆಧಿಪತ್ಯಕ್ಕೆ ಕರ್ನಾಟಕವು ಸೇರಿದ್ದುದು ವಿದಿತವಾಗಿಯೇ ಇದೆ. ಈ ಸಂಸ್ಕೃತಿಯು ಕರ್ನಾಟಕದಲ್ಲಿ ಎಲ್ಲಿಯೂ ದೊರಕಿಲ್ಲ ಎನ್ನುವುದು ನಿಜವಾದರೂ ದೊರಕುವ ಸಾಧ್ಯತೆಯನ್ನು ತಳ್ಳಿಹಾಕುವ ಹಾಗಿಲ್ಲ. ಆಗ ಈ ಸಂಸ್ಕೃತಿಯನ್ನು ಏನೆಂದು ಕರೆಯಬೇಕು ಎನ್ನುವ ಪ್ರಶ್ನೆಗೆ ಉತ್ತರ ಖಚಿತವಾಗಿಲ್ಲ. ಆದುದರಿಂದ ಕರ್ನಾಟಕದಲ್ಲಿ ಇತಿಹಾಸ ಆರಂಭಕಾಲವನ್ನು ಎರಡು ಭಾಗಗಳಾಗಿ ಮಾತ್ರ ವಿಂಗಡಿಸಬಹುದು. ಮೊದಲನೆಯದು ಮೆಗಾಲಿತಿಕ್ ಸಂಸ್ಕೃತಿಯ ಅನಂತರದ ಕಾಲ; ಸುಮಾರಾಗಿ ಇದು ಮೌರ್ಯಸಾಮ್ರಾಜ್ಯದ ಕಾಲ. ಇದೇ ಮೊದಲನೆಯ ಭಾಗ. ಎರಡನೆಯ ಭಾಗವೇ ಇದುವರೆವಿಗೂ ನಾವು ಗಮನಿಸಿರುವ ಹತ್ತಾರು ನೆಲೆಗಳ ಸಂಸ್ಕೃತಿ. ಅಂದರೆ ಇದು ಮೌರ್ಯಕಾಲದ ನಂತರ ಬೆಳೆದು ಬಂದ ಸಂಸ್ಕೃತಿ. ಅನೇಕ ನೆಲೆಗಳಲ್ಲಿ ಮೆಗಾಲಿತಿಕ್ ಸಂಸ್ಕೃತಿಯ ನಂತರ ಈ ಎರಡನೆಯ ಹಂತವೇ ಬೆಳಕಿಗೆ ಬಂದಿದೆ. ಅಂದರೆ ಇಲ್ಲಿ ಮೊದಲನೆಯ ಹಂತ ಕಾಣಬರುವುದಿಲ್ಲ.

ಈ ಎರಡನೆಯ ಹಂತವನ್ನು ನಾವು ಗಮನಿಸಿದಾಗ, ಅಲ್ಲಿ ಶಾತವಾಹನ ನಾಣ್ಯಗಳು ಮುಖ್ಯವಾಗಿ ಕಂಡುಬಂದರೂ ಆ ಕಾಲವನ್ನು ಆಂಧ್ರಕಾಲ ಎಂದು ಕರೆಯುವುದು ತಪ್ಪಾಗುತ್ತದೆ. ಆದುದರಿಂದ ಅದನ್ನು ಇತಿಹಾಸ ಆರಂಭಕಾಲದ ಎರಡನೆಯ ಹಂತವೆಂದೇ ನಾವು ಕರೆಯಬೇಕು.

ಕೊನೆಯದಾಗಿ, ಈ ಸಂಸ್ಕೃತಿಯ ಕಾಲಮಾನವನ್ನು ಗಮನಿಸಬೇಕು. ಕ್ರಿ.ಪೂ. ನಾಲ್ಕನೆಯ ಶತಮಾನದಿಂದ ಕ್ರಿ.ಶ. ಒಂದನೆಯ ಶತಮಾನದವರೆಗಿನ ಕಾಲವನ್ನು ಮೊದಲನೆಯ ಹಂತವೆಂದೂ ಕ್ರಿ.ಶ. ಒಂದನೆಯ ಶತಮಾನದಿಂದ ಕ್ರಿ.ಶ. ಮೂರನೆಯ ಶತಮಾನದವರೆಗಿನ ಕಾಲವನ್ನು ಎರಡನೆಯ ಹಂತವೆಂದೂ ಕರೆಯಬೇಕಾಗುತ್ತದೆ. ಅನಂತರದ ಕಾಲವನ್ನು ಇತಿಹಾಸ ಕಾಲಕ್ಕೆ ಸೇರಿಸಬೇಕಾಗುತ್ತದೆ. ಸದ್ಯದ ಮಟ್ಟಿಗೆ, ನಮಗೆ ದೊರಕಿರುವ ಆಧಾರಗಳ ಮೇಲೆ ಈ ರೀತಿಯ ಕಾಲನಿರ್ಣಯವೇ ಸಮಂಜಸವಾದುದೆಂದು ಹೇಳಲೇಬೇಕು. ಇತಿಹಾಸ ಆರಂಭಕಾಲದ ಪೂರ್ಣ ಪ್ರಮಾಣದ (ಸನ್ನತಿಯಂತಹ) ಪುರಾತತ್ವ ನೆಲೆಯನ್ನು ಶೋಧಿಸಿ, ಉತ್ಖನನ ನಡೆಸಿದಾಗ ಮಾತ್ರ ಇದರ ವಿಷಯದಲ್ಲಿ ಇನ್ನೂ ಹೆಚ್ಚಿನ ಮಾಹಿತಿ ದೊರೆಯಲು ಸಾಧ್ಯ.